# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2059 (2326)

2) ಸದಸ್ಯರ ಹೆಸರು : ಶ್ರೀ ಎಸ್. ನಾಗರಾಜ್ (ಸಂದೇಶ್ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

3) ಉತ್ತರಿಸುವ ದಿನಾಂಕ : 29.03.2021.

4) ಉತ್ತರಿಸುವವರು : ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಕಳೆದ ಒಂದು ತಿಂಗಳಿಂದ ಎಲ್ಲೆಲ್ಲಿ ಅರಣ್ಯಕ್ಕೆ ಬೆಂಕಿ ಬಿದ್ದಿವೆ; ಈ ಕಾಡ್ಗಿಚ್ಚಿನಿಂದ ನಾಶವಾಗಿರುವ ಅರಣ್ಯ ಪ್ರದೇಶದ ವಿಸ್ತೀರ್ಣ ಎಷ್ಟು ಈ ಅರಣ್ಯ ನಾಶದಿಂದ ಉಂಟಾಗಿರುವ ನಷ್ಟ ಹಾಗೂ ಪ್ರಾಣಿ ಪಕ್ಷಿಗಳ ಜೀವಕ್ಕೆ ಹಾನಿ ಆಗಿದೆಯೇ; | ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಕಳೆದ ಒಂದು ತಿಂಗಳಿನಿಂದ ಬೆಂಕಿ ಬಿದ್ದ ಪ್ರಕರಣಗಳ ವಿವರ ಈ ಕೆಳಗಿನಂತಿದೆ. (ಕೆಳಗಿನ ಕೋಷ್ಟಕಗಳನ್ನು ನೋಡಿ) |

**ಮೈಸೂರು ಜಿಲ್ಲೆ:**

| ಅರಣ್ಯ ಪ್ರದೇಶದ ಹೆಸರು | ವಿಸ್ತೀರ್ಣ (ಹೆಕ್ಟೇರ್‌ಗಳಲ್ಲಿ) |
|---|---|
| ಮೈಸೂರು ವಿಭಾಗ | |
| ಕೊಣನೂರುಗುಡ್ಡ | 6.50 |
| ಕಾರ್ಯಗುಡ್ಡ | 7.00 |
| ಹಳೆಮಂಚಹಳ್ಳಿ | 1.00 |
| ಕೊತ್ತೇಗಾಲಗುಡ್ಡ | 0.50 |
| ಹುಣಸಹಳ್ಳಿ ಬಫರ್ ಜೋನ್ | 1.00 |
| ಕುಕ್ಕೂರು | 2.00 |
| ಮುಡುಕುತೊರೆ | 2.00 |
| ಒಟ್ಟು | **20.00** |
| ಹುಣಸೂರು ವಿಭಾಗ | |
| ಹಂದಿಗುಡ್ಡ ಕಾವಲ್ | 2.00 |
| ಒಟ್ಟು | **2.00** |
| ಮೈಸೂರು ಜಿಲ್ಲೆ ನಾಗರಹೊಳೆ ಹುಲಿ ಸಂರಕ್ಷಿತ ಪ್ರದೇಶ ವ್ಯಾಪ್ತಿ | |
| ಅಂತರಸಂತೆ | 20.00 |
| ಒಟ್ಟು | **20.00** |

**ಚಾಮರಾಜನಗರ ಜಿಲ್ಲೆ:**

| ಅರಣ್ಯ ಪ್ರದೇಶದ ಹೆಸರು | ವಿಸ್ತೀರ್ಣ (ಹೆಕ್ಟೇರ್‌ಗಳಲ್ಲಿ) |
|---|---|
| ಮಲೈಮಹದೇಶ್ವರ ವನ್ಯಜೀವಿ ವಿಭಾಗ | |
| ಬೂಳಿ ಗುಡ್ಡ | 4.00 |
| ಮದುಮಲೈ ಗುಡ್ಡ | 4.00 |
| ಒಟ್ಟು | **8.00** |
| ಕಾವೇರಿ ವನ್ಯಜೀವಿ ವಿಭಾಗ | |
| ಕುರಿಗಡ್ಡೆ | 1.20 |
| ಹರಿಸಿನಕಲ್ಲು ಒಡ್ಡು | 5.30 |
| ಮಸೆಕಲ್ಲುಬೆಟ್ಟ | 4.20 |
| ಸತ್ಯಗುಡ್ಡೆವಾಡ | 6.30 |
| ತೆಳ್ಳನೂರು ಗಸ್ತು | 6.50 |
| ಉಡುಪಾಣೆ ಗುಡ್ಡ | 8.00 |
| ಒಟ್ಟು | **32.10** |
| ಚಾಮರಾಜನಗರ ಜಿಲ್ಲೆ ಬಂಡೀಪುರ ಹುಲಿ ಸಂರಕ್ಷಿತ ಪ್ರದೇಶ ವ್ಯಾಪ್ತಿ | |
| ನೇನೆಕಟ್ಟೆ ಹಾಗೂ ಭೀಮನಬೀಡು | 1.00 |
| ಒಟ್ಟು | **1.00** |
| ಒಟ್ಟಾರೆ | **83.10** |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| | | ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳ ವ್ಯಾಪ್ತಿಯಲ್ಲಿ ಉಂಟಾಗಿರುವ ಬೆಂಕಿ ಪ್ರಕರಣಗಳು ನೆಲಮಟ್ಟದ ಬೆಂಕಿಯಾಗಿದ್ದು, ಇದರಿಂದ ಒಣಗಿದಹುಲ್ಲು ಮತ್ತು ಕುರಚಲು ಗಿಡಗಳು ಬೆಂಕಿಗೆ ಪ್ರಭಾವಿತವಾಗಿದ್ದು, ಇದರಿಂದ ಕಾಯಂ ಅರಣ್ಯ ಸಂಪತ್ತು ಮತ್ತು ವನ್ಯಜೀವಿ ಸಂಕುಲಗಳಿಗೆ ಹಾನಿಯಾಗಿರುವುದಿಲ್ಲ. |
| ಆ) | ಅರಣ್ಯ ಬೆಂಕಿಯನ್ನು ತಡೆಯಲು ಯಾವ ಯಾವ ಕ್ರಮ ತೆಗೆದುಕೊಳ್ಳಲಾಗಿದೆ; ಮುಂಬರುವ ಬಿರುಬೇಸಗೆಯ ದಿನಗಳಲ್ಲಿ ಅರಣ್ಯಕ್ಕೆ ಬೆಂಕಿ ಬೀಳುವ ಸಂಭವ ಹೆಚ್ಚಾಗಿರುವುದರಿಂದ ಇದನ್ನು ತಡೆಗಟ್ಟಲು ಸೂಕ್ತ ಮುಂಜಾಗರೂಕತೆ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆಯೇ? (ವಿವರ ಒದಗಿಸುವುದು). | **ಕಾಡ್ಗಿಚ್ಚು ನಿಯಂತ್ರಣಕ್ಕಾಗಿ ಪ್ರಮಾಣಿತ ಕಾರ್ಯ ವಿಧಾನದ ಪ್ರಕಾರ (SOP) ಈ ಕೆಳಕಂಡ ಮುಂಜಾಗ್ರತಾ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ.**<br>1. ಹಾಲಿ ಇರುವ ಬೆಂಕಿ ಲೈನ್‌ಗಳನ್ನು ನಿರ್ವಹಣೆ ಮಾಡಲಾಗುತ್ತಿದೆ.<br>2. ಅರಣ್ಯ ಪ್ರದೇಶಕ್ಕೆ ಬೆಂಕಿ ಬೀಳದಂತೆ ನೋಡಿಕೊಳ್ಳಲು ಹಾಗೂ ಆಕಸ್ಮಿಕವಾಗಿ ಬೆಂಕಿ ಬಿದ್ದಂತಹ ಸಂದರ್ಭದಲ್ಲಿ ಬೆಂಕಿಯನ್ನು ನಂದಿಸುವುದಕ್ಕಾಗಿ ಬೆಂಕಿ ವಾಚರ್‌ಗಳನ್ನು ನೇಮಕ ಮಾಡಿಕೊಳ್ಳಲಾಗುತ್ತಿದೆ.<br>3. ಇಲಾಖಾ ವಾಹನಗಳು ಹಾಗೂ ಎಲ್ಲಾ ರಕ್ಷಣಾ ಸಿಬ್ಬಂದಿಗಳನ್ನು ಬೆಂಕಿ ರಕ್ಷಣೆ ಕೆಲಸಗಳಿಗಾಗಿ ಪೂರ್ಣ ಪ್ರಮಾಣದಲ್ಲಿ ನಿಯೋಜಿಸಿಕೊಳ್ಳಲಾಗುತ್ತಿದೆ.<br>4. ಬೇಸಿಗೆಯ ಕಾಲದಲ್ಲಿ ಅರಣ್ಯ ಪ್ರದೇಶಕ್ಕೆ ಬೆಂಕಿ ಬಿದ್ದಂತಹ ಸಂದರ್ಭದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಬೆಂಕಿ ಹರಡದಂತೆ ಕೂಡಲೇ ಬೆಂಕಿಯನ್ನು ನಂದಿಸಿ ನಿಯಂತ್ರಣ ಮಾಡಲಾಗುತ್ತಿದೆ.<br>5. ಬೇಸಿಗೆಯ ಕಾಲದಲ್ಲಿ ರಕ್ಷಿತ ಅರಣ್ಯ ಪ್ರದೇಶ ಮತ್ತು ಇತರೆ ಅರಣ್ಯ ಪ್ರದೇಶಗಳಲ್ಲಿ ವಿಶೇಷ ಬೆಂಕಿ ಕಾವಲು ಶಿಬಿರಗಳನ್ನು ನಿರ್ಮಿಸಿ ಅರಣ್ಯಗಳನ್ನು ಕಾಡ್ಗಿಚ್ಚಿನಿಂದ ಕಾಪಾಡುವ ಕೆಲಸವು ನಿರಂತರವಾಗಿ ನಿರ್ವಹಿಸಲಾಗುತ್ತಿದೆ.<br>6. ಬೇಸಿಗೆಯ ಕಾಲದಲ್ಲಿ ಅರಣ್ಯ ಪ್ರದೇಶಕ್ಕೆ ಬಿದ್ದ ಸಂದರ್ಭದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಅರಣ್ಯ ಪ್ರದೇಶಕ್ಕೆ ಬೆಂಕಿ ಹರಡುವುದನ್ನು ತಡೆಗಟ್ಟುವುದಕ್ಕಾಗಿ ಸಿಬ್ಬಂದಿಗಳು ಹಾಗೂ ಬೆಂಕಿ ವಾಚರ್‌ಗಳು ಬೆಂಕಿ ನಂದಿಸುವ ಕಾರ್ಯದಲ್ಲಿ ತೊಡಗಿಸಿಕೊಂಡು ಬೆಂಕಿಯನ್ನು ನಿಯಂತ್ರಣ ಮಾಡುವುದಕ್ಕೆ ಸಂಬಂಧಿಸಿದಂತೆ ಎಲ್ಲಾ ರೀತಿಯ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>7. ಬೇಟೆ ತಡೆ ಶಿಬಿರ, ಬೆಂಕಿ ಕಾವಲು ಶಿಬಿರಗಳಿಗೆ ಬೇಕಾಗುವ ಅಗತ್ಯ ಸಲಕರಣೆಗಳನ್ನು (Fire Protection Kits – Water bottle, helmet, shoes, fire beater) ಒದಗಿಸಲಾಗಿದೆ.<br>8. ಹಳ್ಳಿಯ ಜನರುಗಳಲ್ಲಿ ಅರಣ್ಯ ಹಾಗೂ ವನ್ಯ ಸಂಪತ್ತನ್ನು ಕಾಡ್ಗಿಚ್ಚಿನಿಂದ ರಕ್ಷಿಸುವುದರ ಬಗ್ಗೆ ಅರಣ್ಯ ಪ್ರದೇಶಕ್ಕೆ ಬೆಂಕಿ ಇಡದಂತೆ ಅರಿವು ಮೂಡಿಸುವುದಕ್ಕೆ ಸಂಬಂಧಿಸಿದಂತೆ ಕರಪತ್ರಗಳನ್ನು ಮುದ್ರಣ ಮಾಡಿ ಅರಣ್ಯ ಪ್ರದೇಶಕ್ಕೆ ಹೊಂದಿಕೊಂಡಂತಿರುವ ಗ್ರಾಮಗಳಲ್ಲಿ ವಿತರಿಸಲಾಗಿದೆ. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| | | 9. ರಕ್ಷಿತ ಪ್ರದೇಶಗಳು ಅದರಲ್ಲೂ ಹುಲಿ ಸಂರಕ್ಷಿತ ಪ್ರದೇಶಗಳಿಗೆ ಹೆಚ್ಚಿನ ನಿಗಾ ಇಡಲು ಅಗ್ನಿ ಶಾಮಕ ದಳದ ಉನ್ನತ ಅಧಿಕಾರಿಗಳೊಂದಿಗೆ ಚರ್ಚೆ ಮಾಡಿ ಬಂಡೀಪುರ, ನಾಗರಹೊಳೆ, ಭದ್ರಾ, ಬಿ.ಆರ್.ಟಿ.ಗೆ (ಬಿಳಿಗಿರಿ ರಂಗನ ಬೆಟ್ಟ), ಕಾವೇರಿ ಮತ್ತು ಮಲೈ ಮಹದೇಶ್ವರ ವನ್ಯಧಾಮಗಳಲ್ಲಿ ಅಗ್ನಿ ಶಾಮಕ ವಾಹನ ಮತ್ತು ಕ್ವಿಕ್ ರೆಸ್ಪಾನ್ಸ್ ವಾಹನವನ್ನು ನಿಯೋಜಿಸಲಾಗಿದೆ.<br>10. ದೊಡ್ಡ ಪ್ರಮಾಣದ ಬೆಂಕಿ ಉಂಟಾದ ಸಂದರ್ಭದಲ್ಲಿ ಭಾರತೀಯ ವಾಯುಸೇನೆಯ ಸೇವೆಯನ್ನು ಪಡೆದು ಬೆಂಕಿಯನ್ನು ನಿಯಂತ್ರಿಸಲು ಕ್ರಮಕೈಗೊಳ್ಳಲಾಗುತ್ತದೆ.<br>11. ರಾಜ್ಯದ ಅರಣ್ಯ ಪ್ರದೇಶಗಳಲ್ಲಿ ಉಂಟಾಗುವ ಕಾಡ್ಗಿಚ್ಚು ತಡೆಯುವ ನಿಟ್ಟಿನಲ್ಲಿ **"ಬೆಂಕಿ ಅಧ್ಯಯನ ವಿಶ್ಲೇಷಣೆ ಮತ್ತು ಉಸ್ತುವಾರಿ ಕೋಶ"** ವನ್ನು ಅರಣ್ಯ ಇಲಾಖೆಯ ಸಹಯೋಗದೊಂದಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ದಲ್ಲಿ ಸ್ಥಾಪಿಸಲಾಗಿರುತ್ತದೆ.<br>12. ಸದರಿ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರವು ಅರಣ್ಯ ಪ್ರದೇಶದಲ್ಲಿ ಉಂಟಾಗುವ ಕಾಡ್ಗಿಚ್ಚು ಪ್ರದೇಶಗಳನ್ನು ಸೆಟಲೈಟ್ ಮುಖಾಂತರ ಗುರುತಿಸಿ ಸಂಬಂಧಪಟ್ಟ ಅಧಿಕಾರಿಗಳಿಗೆ ಮೊಬೈಲ್ ಆ್ಯಪ್ ಮುಖಾಂತರ ನಿರ್ದಿಷ್ಟ ಸ್ಥಳದ ವಿವರವನ್ನು ತಕ್ಷಣ ಒದಗಿಸುತ್ತಿದ್ದು, ಅದರಂತೆ ಅಧಿಕಾರಿಗಳು ಕಾರ್ಯಪ್ರವೃತ್ತರಾಗಿ ಕಾಡ್ಗಿಚ್ಚು ನಿಯಂತ್ರಣ ಕಾರ್ಯಗಳನ್ನು ಕೈಗೊಳ್ಳುತ್ತಿರುತ್ತಾರೆ.<br>13. ಹಾಲಿ ಇರುವ ಬೆಂಕಿ ರೇಖೆಗಳ ನಿರ್ವಹಣೆ ಮತ್ತು ಹೊಸದಾಗಿ ಬೆಂಕಿ ರೇಖೆಗಳನ್ನು ನಿರ್ಮಾಣ ಮಾಡುವುದು.<br>14. ಗ್ರಾಮ ಸಭೆ ಹಾಗೂ ಗ್ರಾಮ ಅರಣ್ಯ ಸಮಿತಿ ಸಭೆಗಳಲ್ಲಿ ಬೆಂಕಿಯಿಂದಾಗುವ ಹಾನಿಯ ಬಗ್ಗೆ ಗ್ರಾಮಸ್ಥರಲ್ಲಿ ಅರಿವು ಮತ್ತು ತಿಳುವಳಿಕೆ ಮೂಡಿಸುವ ಕಾರ್ಯ ಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.<br>15. ಅರಣ್ಯದ ಮುಂಚೂಣಿ ಸಿಬ್ಬಂದಿಗಳಿಂದ ಹಗಲು ಮತ್ತು ರಾತ್ರಿ ವೇಳೆಯಲ್ಲಿ ಗಸ್ತು ಕಾರ್ಯ ಕೈಗೊಂಡು ಅರಣ್ಯದಲ್ಲಿ ಬೆಂಕಿ ಬೀಳದಂತೆ ನಿಗಾವಹಿಸಲಾಗಿದೆ.<br>16. ನಿಸ್ತುಂತು ಮತ್ತು ವಾಕಿ ಟಾಕಿಗಳನ್ನು ಸಿಬ್ಬಂದಿಗಳಿಗೆ ಒದಗಿಸಲಾಗಿದೆ.<br>17. ಅರಣ್ಯ ಪ್ರದೇಶಕ್ಕೆ ಹೊಂದಿಕೊಂಡಿರುವ ಗ್ರಾಮಗಳಿಗೆ ಸಿಬ್ಬಂದಿ ನಿಯೋಜಿಸಿ ಸಂವಾದ ನಡೆಸಿ ಬೆಂಕಿ ರಕ್ಷಣಾ ಕಾರ್ಯಗಳಲ್ಲಿ ತೊಡಗಿಸಿಕೊಂಡು ಸಹಕಾರ ಪಡೆಯಾಲಾಗಿದೆ.<br>18. ಬೆಂಕಿ ರಕ್ಷಣಾ ಸಿಬ್ಬಂದಿಗಳಿಗೆ ಶುದ್ಧ ಕುಡಿಯುವ ನೀರಿನ ಸೌಲಭ್ಯ ಒದಗಿಸಲಾಗಿದೆ. |

| | | |
|---|---|---|
| | | 19. ಸ್ಥಳಿಯ ಆಸ್ಪತ್ರೆಗಳಲ್ಲಿ ವೈದ್ಯರು, ಆಂಬ್ಯೂಲೆನ್ಸ್, ಔಷದಿ ಅಂಗಡಿ, ಪೊಲೀಸ್. ಅಗ್ನಿಶಾಮಕ ದಳ, ತಹಸಿಲ್ದಾರ್ ಮತ್ತು ಇತರೆ ಸಂಬಂಧಪಟ್ಟ ಎಲ್ಲಾ ಇಲಾಖೆಗಳ ಮೊಬೈಲ್ ಮತ್ತು ದೂರವಾಣಿ ಸಂಖ್ಯೆಗಳ ಮಾಹಿತಿಗಳನ್ನು ಕೂಡಲೇ ಪಡೆದುಕೊಂಡು ಎಲ್ಲಾ ಸಿಬ್ಬಂದಿಗಳಿಗೂ ಲಭ್ಯವಾಗುವಂತೆ ನೋಡಿಕೊಳ್ಳಲಾಗಿದೆ.<br>20. ಮಧ್ಯಾಹ್ನದ ಸಮಯದಲ್ಲಿ ಸೂಕ್ಷ್ಮ ಮತ್ತು ಅತೀ ಸೂಕ್ಷ್ಮ ಪ್ರದೇಶಗಳಲ್ಲಿ ವಿಶೇಷ ಕಾವಲು ಹಾಕಿ ವ್ಯಾಪಕ ಕ್ರಮ ಜರುಗಿಸಲಾಗಿದೆ. |

ಸಂಖ್ಯೆ: ಅಪಜೀ 89 ಎಫ್‌ಡಬ್ಲ್ಯೂಎಲ್ 2021

(ಉಮೇಶ್ ವಿ. ಕತ್ತಿ)
ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕ ವ್ಯವಹಾರಗಳ ಸಚಿವರು